# ಕರ್ನಾಟಕ ವಿಧಾನ ಪರಿಷತ್

| | |
|---|---|
| ಚುಕ್ಕೆ ಗುರುತಿನ ಪ್ರಶ್ನೆ ಸಂಖ್ಯೆ | 1057 |
| ಮಾನ್ಯ ಸದಸ್ಯರ ಹೆಸರು | ಶ್ರೀ ಆರ್.ಪ್ರಸನ್ನ ಕುಮಾರ್ (ಸ್ಥಳೀಯ ಸಂಸ್ಥೆಗಳ ಕ್ಷೇತ್ರ) |
| ಉತ್ತರಿಸಬೇಕಾದ ದಿನಾಂಕ | 16.03.2020 |
| ಉತ್ತರಿಸುವ ಸಚಿವರು | ಹಿಂದುಳಿದ ವರ್ಗಗಳ ಕಲ್ಯಾಣ ಸಚಿವರು |

| ಕ್ರ.ಸಂ | ಪ್ರಶ್ನೆ | ಉತ್ತರ |
|---|---|---|
| ಅ) | 2017-18 ರಿಂದ 2018-19ನೇ ಸಾಲಿನವರೆಗೆ ಶಿವಮೊಗ್ಗ ಜಿಲ್ಲೆಗೆ ಸಂಬಂಧಿಸಿದಂತೆ ಡಿ.ದೇವರಾಜ ಅರಸು ನಿಗಮದಿಂದ ಕೊಳವೆ ಬಾವಿಗಳನ್ನು ಕೊರೆಯಲು ನಿಗಧಿಪಡಿಸಲಾಗಿದ್ದ ಗುರಿಯೆಷ್ಟು; | 2017-18 ರಿಂದ 2018-19ನೇ ಸಾಲಿನವರೆಗೆ ಶಿವಮೊಗ್ಗ ಜಿಲ್ಲೆಗೆ ನಿಗದಿಪಡಿಸಿದ ಕೊಳವೆ ಬಾವಿಗಳನ್ನು ಕೊರೆಯಲು ನಿಗಧಿಪಡಿಸಿದ ಗುರಿ - 413.<br>ವರ್ಷವಾರು ವಿವರ ಈ ಕೆಳಕಂಡಂತಿದೆ.<br>2017-18 : 276<br>2018-19 : 137 |
| ಆ) | ಕೊರೆದಿರುವ ಕೊಳವೆ ಬಾವಿಗಳೆಷ್ಟು; ಕೊರೆಯಲು ಬಾಕಿ ಇರುವ ಕೊಳವೆ ಬಾವಿಗಳ ಸಂಖ್ಯೆ ಎಷ್ಟು; (ವಿವರ ನೀಡುವುದು) | ಕೊರೆದಿರುವ ಕೊಳವೆ ಬಾವಿಗಳ ಸಂಖ್ಯೆ : 274<br>ಕೊರೆಯಲು ಬಾಕಿ ಇರುವ ಕೊಳವೆ ಬಾವಿಗಳ ಸಂಖ್ಯೆ : 139<br>ವಿಧಾನಸಭಾ ಕ್ಷೇತ್ರವಾರು ವಿವರ ಈ ಕೆಳಕಂಡಂತಿದೆ |

| ಕ್ರ.ಸಂ | ವಿಧಾನ ಸಭಾ ಕ್ಷೇತ್ರದ ಹೆಸರು | ಕೊಳವೆ ಬಾವಿ ಕೊರೆಯಲು ಬಾಕಿ |
|---|---|---|
| 1 | ಶಿವಮೊಗ್ಗ ಗ್ರಾಮಾಂತರ | 29 |
| 2 | ಭದ್ರಾವತಿ | 21 |
| 3 | ಶಿವಮೊಗ್ಗ ನಗರ | 0 |
| 4 | ತೀರ್ಥಹಳ್ಳಿ | 21 |
| 5 | ಶಿಕಾರಿಪುರ | 25 |
| 6 | ಸೊರಬ | 22 |
| 7 | ಸಾಗರ | 21 |
| | ಒಟ್ಟು | 139 |

| ಕ್ರ.ಸಂ | ಪ್ರಶ್ನೆ | ಉತ್ತರ |
|---|---|---|
| ಇ) | ಕೊರೆದಿರುವ ಕೊಳವೆ ಬಾವಿಗಳಲ್ಲಿ ವಿದ್ಯುದ್ದೀಕರಣ ಆಗದಿರುವ ಕೊಳವೆ ಬಾವಿಗಳ ಸಂಖ್ಯೆ ಎಷ್ಟು; | ವಿದ್ಯುದ್ದೀಕರಣ ಆಗದಿರುವ ಕೊಳವೆ ಬಾವಿಗಳ ಸಂಖ್ಯೆ : 42<br>42 ಕೊಳವೆ ಬಾವಿಗಳು ವಿದ್ಯುತ್ ಸರಬರಾಜು ಕಂಪನಿಯಲ್ಲಿ ವಿದ್ಯುತ್ ಸಂಪರ್ಕ ಕಲ್ಪಿಸಲು ಬಾಕಿ ಇದ್ದು, ವಿದ್ಯುದ್ದೀಕರಣಗೊಳಿಸುವ ಪ್ರಕ್ರಿಯೆ ಪ್ರಗತಿಯಲ್ಲಿದೆ. |
| ಉ) | ಪಂಪ್ ಮೋಟಾರ್ ಅಳವಡಿಕೆಗಾಗಿ ಬಾಕಿ ಇರುವ ಕೊಳವೆ ಬಾವಿಗಳ ಸಂಖ್ಯೆ ಎಷ್ಟು; | ಕೊರೆದಿರುವ ಎಲ್ಲಾ ಕೊಳವೆ ಬಾವಿಗಳಿಗೆ ಪಂಪ್ ಮೋಟಾರ್ ಅಳವಡಿಸಲಾಗಿದೆ. |
| ಊ) | ಬಾಕಿ ಇರುವ ಪ್ರಕರಣಗಳನ್ನು ಯಾವ ಕಾಲಮಿತಿಯೊಳಗೆ ಪೂರ್ಣಗೊಳಿಸಲು ಉದ್ದೇಶಿಸಲಾಗಿದೆ? (ವಿವರ ನೀಡುವುದು) | 2017-18ನೇ ಸಾಲಿನ ಕೊಳವೆ ಬಾವಿಗಳ 2 ಫಲಾನುಭವಿಗಳ ಜಮೀನಿನ ಬಗ್ಗೆ ತಕರಾರರು ಇರುವುದರಿಂದ ಕೊಳವೆ ಬಾವಿಗಳನ್ನು ಕೊರೆದಿರುವುದಿಲ್ಲ. ತಕರಾರು ಇತ್ಯರ್ಥಗೊಂಡ ನಂತರ ಕೊರೆಯಿಸಲಾಗುವುದು.<br>2018-19ನೇ ಸಾಲಿನ ಕೊಳವೆ ಬಾವಿಗಳನ್ನು ಕೊರೆಯಲು ದಿನಾಂಕ:04-01-2019ರಂದು ಟೆಂಡರ್ ಆಹ್ವಾನಿಸಲಾಗಿತ್ತು ಆದರೆ ಮಾನ್ಯ ಉಚ್ಚ ನ್ಯಾಯಾಲಯ, ಕಲಬುರಗಿ ಪೀಠ ದಿನಾಂಕ:09-04-2019ರ ರಂದು ನೀಡಿದ ಮಧ್ಯಂತರ ಆದೇಶದಲ್ಲಿ ಟೆಂಡರ್‌ಗೆ ತಡೆಯಾಜ್ಞೆ ನೀಡಿದ್ದರಿಂದ ಪ್ರಕ್ರಿಯೆ ಸ್ಥಗಿತಗೊಳಿಸಲಾಗಿದ್ದು, |

...2

| | | |
|---|---|---|
| | | ಪ್ರಸ್ತುತ ಮಾನ್ಯ ಉಚ್ಛನ್ಯಾಯಾಲಯ, ಕಲಬುರಗಿ ಪೀಠ ದಿನಾಂಕ:15-10-2019ರ ಆದೇಶದಲ್ಲಿ ಟೆಂಡರ್ ರದ್ದುಪಡಿಸಿ ಹೊಸದಾಗಿ ಟೆಂಡರ್ ಆಹ್ವಾನಿಸಲು ನಿರ್ದೇಶಿಸಿದ ಮೇರೆಗೆ ನಿಗಮದಿಂದ ದಿನಾಂಕ:31-12-2019ರಂದು ಹೊಸದಾಗಿ ಟೆಂಡರ್ ಆಹ್ವಾನಿಸಲಾಗಿರುತ್ತದೆ<br>ಈ ಹಿನ್ನೆಲೆಯಲ್ಲಿ 2018-19ನೇ ಸಾಲಿನ ಕೊಳವೆ ಬಾವಿಗಳನ್ನು ಕೊರೆಯಿಸಲು ವಿಳಂಬವಾಗಿದ್ದು. ಟೆಂಡರ್ ಪ್ರಕ್ರಿಯೆ ಪೂರ್ಣಗೊಳಿಸಿ ಕೊಳವೆ ಬಾವಿಗಳನ್ನು ಶೀಘ್ರವಾಗಿ ಕೊರೆಯಿಸಲು ಎಲ್ಲಾ ಅವಶ್ಯ ಕ್ರಮಗಳನ್ನು ಕೈಗೊಳ್ಳಲಾಗುತ್ತಿದೆ. |

ಸಂ: ಹಿಂವಕ 175 ಬಿಎಂಎಸ್ 2020

(ಬಿ.ಶ್ರೀರಾಮುಲು)
ಹಿಂದುಳಿದ ವರ್ಗಗಳ ಕಲ್ಯಾಣ ಇಲಾಖೆ